KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೧೧ (ಮಾಘ ೨೧, ಶಕ ವರ್ಷ ೧೯೩೨) | ಸಂಚಿಕೆ ೬ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಾರಿಇ 105 ಸಾಸಂಸೇ 2010, ಬೆಂಗಳೂರು, ದಿನಾಂಕ:11ನೇ ಜನವರಿ, 2011**

ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ 5 ಉಪಕಲಂ (2)ರಲ್ಲಿ ಹಾಗೂ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ರಘು, ಶಾಸಕರು, ಸಿ.ವಿ.ರಾಮನ್ ನಗರ ವಿಧಾನಸಭಾ ಕ್ಷೇತ್ರ, ಬೆಂಗಳೂರು ಇವರನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಮಂಡಳಿ ನಿರ್ದೇಶಕರನ್ನಾಗಿ ಹಾಗೂ ಮಂಡಳಿ ಅಧ್ಯಕ್ಷರನ್ನಾಗಿ ಮಾನ್ಯ ಶ್ರೀ ಆರ್. ಅಶೋಕ, ಒಳಾಡಳಿತ ಮತ್ತು ಸಾರಿಗೆ ಸಚಿವರು ಹಾಗೂ ಅಧ್ಯಕ್ಷರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಇವರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರ**

ಪಿ.ಆರ್.18

ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಾರಿಇ 105 ಸಾಸಂಸೇ 2010, ಬೆಂಗಳೂರು, ದಿನಾಂಕ:10ನೇ ಜನವರಿ, 2011**

ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್ ನ Article of Associationನ 8 ಮತ್ತು 17ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಸತೀಶ್ ರೆಡ್ಡಿ, ಶಾಸಕರು, ಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರ, ಬೆಂಗಳೂರು ಇವರನ್ನು ಡಿ.ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್ ನ ನಿರ್ದೇಶಕರ ಮಂಡಳಿಯಲ್ಲಿ ನಿರ್ದೇಶಕರನ್ನಾಗಿ ಹಾಗೂ ಅಧ್ಯಕ್ಷರನ್ನಾಗಿ ಶ್ರೀ ಎಂ.ಕೆ. ಶಂಕರಲಿಂಗೇಗೌಡ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ ಇವರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರ**

ಪಿ.ಆರ್.19

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ನಅಇ 233 ಬೆಮಪ್ರಾ 2009, ಬೆಂಗಳೂರು, ದಿನಾಂಕ:11ನೇ ಜನವರಿ, 2011**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 3(3)(ಎಂ) ಮತ್ತು ಕಲಂ (4)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದ ಸದಸ್ಯರನ್ನಾಗಿ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಇಚ್ಛಾನುಸಾರ ಅಥವಾ 3 ವರ್ಷದ ಅವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಲಾಗಿದೆ.

| ಕ್ರಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1. | ಶ್ರೀ ಶಶಿಭೂಷಣ ಶಿವನಗೌಡ ಪಾಟೀಲ್, ಪ್ಲಾಟ್ ನಂ.2537, ಸೆಕ್ಟರ್ 12, ಮಾಳಾ ಮಾರುತಿ ಬಡಾವಣೆ, ಬೆಳಗಾವಿ. | ಸಾಮಾನ್ಯ |
| 2. | ಶ್ರೀ ಗಂಗಾಧರ ಮಾರುತಿ ರಾವ್ ಘುಸಾರಿ,<br>ಮ.ನಂ.509, ಅಟ್ ಪೋಸ್ಟ್, ಕಡಸ, (ಕೆ.ಹೆಚ್) ಬೆಳಗಾವಿ ತಾಲ್ಲೂಕು ಮತ್ತು ಜಿಲ್ಲೆ. | ಸಾಮಾನ್ಯ |
| 3. | ಶ್ರೀಮತಿ ಗೀತಾ ಉಮಾಕಾಂತ ಸುಘಾರೆ, ಮ.ನಂ.300, ಬಸವಗಲ್ಲಿ ಸಹಾಪೂರ ಬೆಳಗಾವಿ ಜಿಲ್ಲೆ. | ಮಹಿಳೆ |
| 4. | ಶ್ರೀ ಅಜಯ ಹರಿನಿವಾಸ ಜಿಡಾ,<br>ವಾಸುದೇವನಿವಾಸ, ಮೊದಲನೇ ಮಹಡಿ, ಗಣೇಶ ಮಂದಿರ ಹತ್ತಿರ<br>ಶ್ರೀ ಗಣೇಶ ಚೌಕ ಹಿಂದ ವಾಡ, ಬೆಳಗಾವಿ. | ಶಿಲ್ಪಿ |
| 5. | ಶ್ರೀ ಸಂಜಯ ಚಂದು ಸಿಂಡಾತಿ, ಆನಂದ ಅಪಾರ್ಟ್‌ಮೆಂಟ್, ಸದಾಶಿವ ನಗರ ಬ್ಲಾಕ್ ನಂ.12, ಬೆಳಗಾವಿ. | ಎಸ್.ಟಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಪಿ.ಆರ್.20

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಆಇ 1054 ವೆಚ್ಚ–12/10, ಬೆಂಗಳೂರು, ದಿನಾಂಕ:13ನೇ ಜನವರಿ, 2011**

ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರುಗಳ ಉಪಯೋಗಕ್ಕಾಗಿ ಖರೀದಿಸಲಾದ 10 ಹೊಸ ಫೋರ್ಡ್ ಫಿಯೆಸ್ಟಾ ವಾಹನಗಳಿಗೆ, ವಾಹನವೊಂದಕ್ಕೆ ತಲಾ 5 ಸೀಟ್ ಕವರ್‌ಗಳಂತೆ, ಒಟ್ಟು ರೂ.2,07,900/– ವೆಚ್ಚದಲ್ಲಿ ಸೀಟ್ ಕವರ್‌ಗಳನ್ನು ಅಳವಡಿಸುವ ಕಾರ್ಯವನ್ನು ನೇರವಾಗಿ ಮೆ:ಸಿಜೋ ಆಟೋಮೆಕ್ ಸಂಸ್ಥೆಯವರಿಗೆ ವಹಿಸಿಕೊಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಕರ್ನಾಟಕ ವಿಧಾನ ಮಂಡಲ ಸಚಿವಾಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೀಟ್ ಕವರ್‌ಗಳ ಅಳವಡಿಕೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕರ್ನಾಟಕ ವಿಧಾನ ಮಂಡಲ ಸಚಿವಾಲಯವು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.22

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಆಇ 1077 ವೆಚ್ಚ–12/10, ಬೆಂಗಳೂರು, ದಿನಾಂಕ:11ನೇ ಜನವರಿ, 2011**

ಅಧಿಸೂಚನೆ ಸಂಖ್ಯೆ: ಆಇ 1284 ವೆಚ್ಚ–12/2009, ದಿನಾಂಕ:24.12.2009ರಲ್ಲಿ ಈ ಮುಂದಿನಂತೆ ತಿದ್ದುಪಡಿ ಮಾಡಲಾಗಿದೆ:

1) ಮೊದಲನೇ ಸಾಲಿನಲ್ಲಿರುವ '44 ನಗರ ಸಭೆಗಳಲ್ಲಿನ' ಎಂಬುದಕ್ಕೆ ಬದಲಾಗಿ '42 ನಗರ ಸಭೆಗಳಲ್ಲಿನ' ಎಂದು ಓದಿಕೊಳ್ಳುವುದು.

2) 12ನೇ ಸಾಲಿನಲ್ಲಿರುವ 'in 49 ULBs.' ಎಂಬುದಕ್ಕೆ ಬದಲಾಗಿ 'in 47 ULBs.' ಎಂದು ಓದಿಕೊಳ್ಳುವುದು.

3) ಮೂರು ಮತ್ತು ನಾಲ್ಕನೇ ಸಾಲುಗಳಲ್ಲಿರುವ 'ರೂ.5.94 ಲಕ್ಷಗಳ' ಎಂಬುದಕ್ಕೆ ಬದಲಾಗಿ 'ರೂ.2.95 ಕೋಟಿಗಳ' ಎಂದು ಓದಿಕೊಳ್ಳುವುದು.

4) 16 ರಿಂದ 21ನೇ ಸಾಲುಗಳಲ್ಲಿರುವ `(ii) Stage II: Detailed design and estimate of the Abattoirs for each ULB. Tender Process for Procurement of Construction Contractors for development of Abattoirs in each ULB through transparent and competitive bidding process (KTPP Act.)' ಎಂಬುದನ್ನು ಸಂಪೂರ್ಣವಾಗಿ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

ಪಿ.ಆರ್.23

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 97 ಸಿಎನ್‌ಎಸ್ 2010, ಬೆಂಗಳೂರು, ದಿನಾಂಕ:6ನೇ ಜನವರಿ, 2011**

ಬಹುರಾಜ್ಯ ಸಹಕಾರ ಸಂಘಗಳ ಅಧಿನಿಯಮ, 2002ರ ಅಡಿಯಲ್ಲಿ ನೋಂದಣಿಯಾಗಿರುವ ರಬ್ಬರ್ ಮಾರ್ಕೆಟಿಂಗ್ ಮತ್ತು ಪ್ರೊಸೆಸಿಂಗ್ ಕೋ–ಆಪರೇಟಿವ್ ಲಿ., ಮಂಗಳೂರು ಇದರ ಬೈಲಾ ಸಂಖ್ಯೆ:36(i)(e) ಪ್ರಕಾರ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ರಬ್ಬರ್ ಮಾರ್ಕೆಟಿಂಗ್ ಮತ್ತು ಪ್ರೊಸೆಸಿಂಗ್ ಕೋ–ಆಪರೇಟಿವ್ ಲಿ., (RUBTECH), ಮಂಗಳೂರು ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡುತ್ತದೆ.

1) ಶ್ರೀ ಅಚ್ಚುತ್ತ ಮೂಡಿತ್ತಾಯ, 'ಅನನ್ಯ' ಕಾವು ಅಂಚೆ, ಮಡ್ನೂರು ಗ್ರಾಮ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ.

2) ಶ್ರೀ ತಿಮ್ಮಪ್ಪ ರೈ ಕೆ. ಕುಂಜದೊಟ್ಟು ಮನೆ, ಚೆನ್ನೈತೋಡಿ ಗ್ರಾಮ, ವಾಮದಪದವು ಅಂಚೆ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್.24

## ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 239 ಎಫ್‌ಡಬ್ಲ್ಯೂಎಲ್ 2010, ಬೆಂಗಳೂರು, ದಿನಾಂಕ:4ನೇ ಜನವರಿ, 2011**

ಕರ್ನಾಟಕ ರಾಜ್ಯ ವನ್ಯಜೀವಿ ಮಂಡಳಿಯ ನಿಯಮಗಳು, 2006ರ ನಿಯಮ 5ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ರಾಜ್ಯ ವನ್ಯಜೀವಿ ಮಂಡಳಿಯ ಸದಸ್ಯರಾದ ಶ್ರೀ ಗೋಪಾಲಕೃಷ್ಣ ಬೇಳೂರು, ಮಾಜಿ ಶಾಸಕರು, ಸಾಗರ ಮತ ಕ್ಷೇತ್ರ, ಶಿವಮೊಗ್ಗ ಜಿಲ್ಲೆ ಇವರನ್ನು ರಾಜ್ಯ ವನ್ಯಜೀವಿ ಮಂಡಳಿಯ ಸದಸ್ಯತ್ವದಿಂದ ಈ ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಆರ್. ಕಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆ.

ಪಿ.ಆರ್.25

## ಆರ್ಥಿಕ ಸಚಿವಾಲಯ

**ಅಧಿಸೂಚನೆ ಸಂಖ್ಯೆ:ಆಇ 954 ವೆಚ್ಚ–12/10, ಬೆಂಗಳೂರು, ದಿನಾಂಕ:13ನೇ ಜನವರಿ, 2011**

ಕೇಂದ್ರೀಯ ಉಣ್ಣೆ ಅಭಿವೃದ್ಧಿ ಮಂಡಳಿಯ ಅನುದಾನದ ನೆರವಿನಿಂದ 'ಕುರಿಗಳ ಉಣ್ಣೆ ಸಂಗ್ರಹಣೆ ಮತ್ತು ಮಾರುಕಟ್ಟೆ ವ್ಯವಸ್ಥೆಗೆ ಸುತ್ತು ನಿಧಿ' ಅನುಷ್ಠಾನಗೊಳಿಸಿ ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಯು ಉಣ್ಣೆ ಸಂಗ್ರಹಣಾ ಕಾರ್ಯಗಳನ್ನು ಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ದಿನಾಂಕ:31.03.2012ರ ವರೆಗೆ ವಿನಾಯಿತಿ ನೀಡಿದೆ.

ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಯು ಈ ಕಾರ್ಯವನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು ಉತ್ತಮ ಗುಣಮಟ್ಟದ ಉಣ್ಣೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

ಪಿ.ಆರ್.26

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆಇ 1033 ವೆಚ್ಚ–12/10, ಬೆಂಗಳೂರು, ದಿನಾಂಕ:13ನೇ ಜನವರಿ, 2011**

ಉತ್ತಮ ಗುಣಮಟ್ಟದ ಪಶು ಆಹಾರವನ್ನು ನಿರಂತರವಾಗಿ ಸರಬರಾಜು ಮಾಡಲು ಅವಶ್ಯವಾಗಿರುವ ಮೆಕ್ಕೆಜೋಳವನ್ನು ರೈತರಿಂದ ನೇರವಾಗಿ ಖರೀದಿಸಲು ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾ ಮಂಡಳಿಗೆ (ಕೆ.ಎಂ.ಎಫ್.) ಅಧಿಸೂಚನೆ ಸಂ.ಆಇ 1438 ವೆಚ್ಚ–12/2009, ದಿನಾಂಕ:11.01.2010ರಲ್ಲಿ ನೀಡಲಾಗಿದ್ದ ವಿನಾಯಿತಿಯನ್ನು ಇನ್ನೂ ಒಂದು ವರ್ಷ ಅವಧಿಗೆ ಮುಂದುವರೆಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕೆ.ಎಂ.ಎಫ್. ಸಂಸ್ಥೆಯು ಈ ಕಾರ್ಯವನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಮೆಕ್ಕೆ ಜೋಳವನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.27 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆಇ 1034 ವೆಚ್ಚ–12/10, ಬೆಂಗಳೂರು, ದಿನಾಂಕ:13ನೇ ಜನವರಿ, 2011**

ಶಿಕ್ಷಣ ಇಲಾಖೆಯು ಕೋರಿರುವಂತೆ, ಬೆಂಗಳೂರು ಉತ್ತರ ಮತ್ತು ದಕ್ಷಿಣ ಶೈಕ್ಷಣಿಕ ಜಿಲ್ಲೆಗಳಲ್ಲಿನ ಒಟ್ಟು 125 ಮಲ್ಟಿ ಲೆವೆಲ್ ಶಾಲಾ ಕಟ್ಟಡಗಳನ್ನು ರೂ.692.50 ಲಕ್ಷಗಳ ವೆಚ್ಚದಲ್ಲಿ ನಿರ್ಮಿಸಲು ಕಾಮಗಾರಿಯನ್ನು ನೇರವಾಗಿ ಸರ್ಕಾರಿ ಸ್ವಾಮ್ಯದ ರಾಜೀವಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಶಿಕ್ಷಣ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ರಾಜೀವಗಾಂಧಿ ಗ್ರಾಮೀಣ ವಸತಿ ನಿಗಮ ಸಂಸ್ಥೆಯು ಈ ಕಾಮಗಾರಿಯನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ನಿರ್ಮಾಣ ಕಾರ್ಯವನ್ನು ಸಮಂಸಜ ದರದಲ್ಲಿ ಸಂಗ್ರಹಿಸುವುದನ್ನು ಶಿಕ್ಷಣ ಇಲಾಖೆಯು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.28 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆಇ 1041 ವೆಚ್ಚ–12/10, ಬೆಂಗಳೂರು, ದಿನಾಂಕ:13ನೇ ಜನವರಿ, 2011**

ರೇಷ್ಮೆ ನೇಯ್ಗೆ ಕಾರ್ಖಾನೆ, ಮೈಸೂರು ಇಲ್ಲಿ ರೇಷ್ಮೆ ಶತಮಾನೋತ್ಸವ ಸ್ಮಾರಕ ಭವನವನ್ನು ರೂ.2.50 ಕೋಟಿ ವೆಚ್ಚದಲ್ಲಿ ನಿರ್ಮಿಸುವ ಕಾರ್ಯವನ್ನು ನೇರವಾಗಿ ಕರ್ನಾಟಕ ಗ್ರಾಮೀಣ ಮೂಲಸೌಲಭ್ಯ ಅಭಿವೃದ್ಧಿ ನಿಗಮ (ಕೆ.ಆರ್.ಐ.ಡಿ.ಎಲ್.) ಈ ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕೆ.ಆರ್.ಐ.ಡಿ.ಎಲ್. ಸಂಸ್ಥೆಯು ಈ ನಿರ್ಮಾಣ ಕಾರ್ಯವನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ನಿರ್ಮಾಣ ಕಾರ್ಯವನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.29 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆರ್‌ಡಿ: 391: ಎಎಸ್‌ಡಿ:2009, ಬೆಂಗಳೂರು, ದಿನಾಂಕ:20ನೇ ಮಾರ್ಚ್, 2010**

ಕಂದಾಯ ಇಲಾಖೆಯ ಸೇವೆಗೆ ಸೇರಿದ ಶಿರಸ್ತೇದಾರ್/ ಉಪತಹಶೀಲ್ದಾರ್ ವೃಂದದ ಶ್ರೀ ಮಾರೆಪ್ಪ ಶಿರಸ್ತೇದಾರ್, ತಹಶೀಲ್ದಾರ್ ಕಾರ್ಯಾಲಯ, ಲಿಂಗಸುಗೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು (ರೆಗ್ಯೂಲೇಷನ್ ಆಫ್ ಪ್ರೊಮೋಷನ್, ಪೇ ಅಂಡ್ ಪೆನ್ಷನ್ ಆಕ್ಟ್ 1973 ಮತ್ತು ನಿಯಮ 1978 ಅಧಿನಿಯಮ 3(1)(ಎ) ರನ್ವಯ ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀಮತಿ ಸರೋಜ ರವರಿಗೆ ಮುಂಬಡ್ತಿ ನೀಡಿದ ದಿನಾಂಕ:28.01.2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–II ವೃಂದಕ್ಕೆ ವೇತನ ಶ್ರೇಣಿ ರೂ.11,400–21,600 ರಲ್ಲಿ ಮುಂಬಡ್ತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್.30

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**FOREST, ECOLOGY AND ENVIRONMENT SECRETARIAT**

**NOTIFICATION**

**No.FEE 265: FEG 2010, Bangalore, Dated:31st December, 2010**

The following officers of the Forest Department are confirmed under rule 19 of Karnataka Civil Services (General Recruitment) Rules, 1977, in the cadre of Assistant Conservator of Forests with effect from the dates mentioned against their names in permanent vacancies available to them in the department in accordance with the Seniority List of Assistant Conservator of Forests published vide Notification No.FEE 33 FEG 2002, Dated:22.03.2005.

| Sl. No. | Name of the Officers Sriyuth | Gradation in the Seniority List | Date of Confirmation |
|---|---|---|---|
| 1 | 2 | 3 | 4 |
| 1. | Sri Raghavendra K.L. | 286 | 17.08.2005 |
| 2. | Sri Banarji P.P. | 298 | 17.08.2005 |

By Order and in the name of Governor of Karnataka,

**VADAGAVE BASAVARAJ**

PR-31

Under Secretary to Government,

Forest, Ecology & Environment Department (Services).

**ಕಂದಾಯ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಕಂಇ 616 ಎಎಸ್‌ಡಿ 2010, ಬೆಂಗಳೂರು, ದಿನಾಂಕ:9ನೇ ನವೆಂಬರ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 391 ಎಎಸ್‌ಡಿ 2009, ದಿನಾಂಕ:20.03.2010 ರಲ್ಲಿ ಶ್ರೀ ಮಾರೆಪ್ಪ, ಶಿರಸ್ತೇದಾರ್, ಇವರಿಗೆ "ಕರ್ನಾಟಕ ನಾಗರೀಕ ಸೇವಾ ನಿಯಮಗಳು (ಆರ್.ಪಿ.ಪಿ.ಪಿ.) 1973 ಮತ್ತು 1978 ಅಧಿನಿಯಮ 3(1)(ಎ) ರನ್ವಯ" ಎಂಬುದರ ಬದಲಾಗಿ "ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ.) ನಿಯಮಾವಳಿಗಳು 1978 ನಿಯಮ 2(1)(ಎ) ರಡಿಯಲ್ಲಿ" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್.32

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆರ್‌ಡಿ 468 ಎಲ್‌ಜಿಬಿ 2009, ಬೆಂಗಳೂರು, ದಿನಾಂಕ:4ನೇ ಜನವರಿ, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 468 ಎಲ್‌ಜಿಬಿ 2009, ದಿನಾಂಕ:16.02.2010 ರಲ್ಲಿ ರಚಿಸಲಾಗಿರುವ ನೆಲಮಂಗಲ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ ನಾಯಕ್**

ಪಿ.ಆರ್.33

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಕಂಇ 267 ಎಲ್ಆರ್ಎ 2009, ಬೆಂಗಳೂರು, ದಿನಾಂಕ:13ನೇ ಜನವರಿ, 2011**

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 48ರ ಉಪ ಕಲಂ (1)(11) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಭೂ ನ್ಯಾಯ ಮಂಡಳಿಗೆ ಈ ಹಿಂದೆ ಮಾಡಿದ್ದ ಎಲ್ಲಾ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಬದಲಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಸದರಿ ಭೂ ನ್ಯಾಯ ಮಂಡಳಿಗಳನ್ನು ಪುನರ್ ರಚಿಸಿ ಆದೇಶ ಹೊರಡಿಸಿದೆ.

| ಕ್ರಮ ಸಂಖ್ಯೆ | ಭೂ ನ್ಯಾಯ ಮಂಡಳಿಯ ಹೆಸರು | ಅಧಿಕಾರೇತರ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|
| 1. | ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ. | 1) ಶ್ರೀಮತಿ ವಿಶಾಲಾಕ್ಷಿ ಕೋಂ ಶಿವಪುತ್ರಪ್ಪ ಬಿಂಗಾಪುರ ಸಾ: ಮುಗಳಿಕಟ್ಟಿ ಶಿಗ್ಗಾಂವ ತಾಲ್ಲೂಕು, ಹಾವೇರಿ ಜಿಲ್ಲೆ.<br>2) ಶ್ರೀ ಲಿಂಗರಾಜ ಹಳವಳ್ಳಿ ಸಾ: ಬಂಕಾಪುರ.<br>3) ಶ್ರೀ ಶಿವಾನಂದ ಫಕ್ಕೀರಪ್ಪ ಮಾದರ ಸಾ: ಬೆಳಗಲಿ<br>4) ಶ್ರೀ ಮುತ್ತಪ್ಪ ಫಕ್ಕೀರಪ್ಪ ಕಲಕಟ್ಟಿ ಸಾ: ಶಿಡ್ಲಾಪೂರ. (ಮೀಸಲಾತಿ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್.34

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**HOME SECRETARIAT**

**NOTIFICATION**

**No.HD 59 PCR 09, Bangalore, Dated:18th January, 2011**

In exercise of the powers conferred by sub-section (1) of section 8 of the Karnataka Control of Organised Crimes Act 2000 (Karnataka Act 1 of 2002) the Government of Karnataka hereby appoints the Principal Public Prosecutor of Principal District & Session Court, Dakshina Kannada, Mangalore to be the Special Public Prosecutor for the Special Court, Principal District & Sessions Court, Dakshina Kannada, Mangalore.

By Order and in the name of Governor of Karnataka,

**T.M. VASUDEVA RAO**

PR-35

Under Secretary to Government,

Home Department (Crimes)

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಹೆಚ್‌ಡಿ 33 ಎಸ್ಎಸ್‌ಟಿ 2011, ಬೆಂಗಳೂರು, ದಿನಾಂಕ:10ನೇ ಜನವರಿ, 2011**

ಮಂಗಳೂರು ನಗರದ ನೆಹರು ಮೈದಾನದಲ್ಲಿ ಹನುಮತ್ ಶಕ್ತಿ ಜಾಗರಣಾ ಅಭಿಯಾನ ಸಮಿತಿ ವತಿಯಿಂದ ಹಿಂದೂ ಸಮಾಜೋತ್ಸವ ನಡೆಸುವ ಹಿನ್ನೆಲೆಯಲ್ಲಿ ಶಾಂತಿ, ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಜಿಲ್ಲಾ ದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು, ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನಾಗಿ ನೇಮಿಸಿ ಹೊರಡಿಸಿದ್ದ ದಿನಾಂಕ:31.12.2010ರ ಆದೇಶ ಸಂಖ್ಯೆ: ಎಂಎಜಿ(2)ಸಿಆರ್.759/2010–11/42278/ಸಿ4ಕ್ಕೆ ಸರ್ಕಾರವು ಘಟನೋತ್ತರ ಅನುಮೋದನೆಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್.36

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 134 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ:11ನೇ ಜನವರಿ, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 39 ಸಿಎಸ್‌ಎಸ್ 2008 ದಿನಾಂಕ:30.03.2010ರಲ್ಲಿ ಬಸವಕಲ್ಯಾಣ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಬಸವಕಲ್ಯಾಣ, ಬೀದರ್ ಜಿಲ್ಲೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಬಸಯ್ಯ ವೀರಭದ್ರಯ್ಯಾ ಸ್ವಾಮಿ ಮು: ಚಂಡಕಾಪೂರ ತಾ: ಬಸವಕಲ್ಯಾಣ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11)ರ ಪ್ರಕರಣ 29ರ ಉಪಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ನಾಗೇಶ್ ಬಿನ್ ಚಿಂತಾಮಣಿ, ಕಾಳಿಗಲ್ಲಿ, ಬಸವಕಲ್ಯಾಣ, ಬೀದರ್ ಜಿಲ್ಲೆ ಇವರನ್ನು ಬಸವಕಲ್ಯಾಣ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಬಸವಕಲ್ಯಾಣ, ಬೀದರ್ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್.37

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**HOME SECRETARIAT**

**ORDER**

**No.HD 25 SCF 2010, Bangalore, Dated:17th January, 2011**

The Principal Secretary to Government, Home Department specially empowered under Section 3(1) of the Conservation of Foreign Exchange and Prevention of Smuggling Activities Act, 1974 (Central Act 52 of 1974), had issued a Detention Order No.HD 25 SCF 2010 Dated:02.11.2010, to detain you from acting in any manner from smuggling of Digital Cameras and Memory Cards, under Section 3(1)(i) of the COFEPOSA Act, 1974.

2. The said Detention order could not be executed by the Executing Authorities. C.I.D., Bangalore, since you were not available at the known place of your residences.

3. Now, therefore, in exercise of the powers conferred by Section 7(1)(b) of the COFEPOSA Act, 1974, the Government of Karnataka hereby direct you to cause appearance before the Principal Secretary to Government, Home Department, Room No.222, 2nd Floor, Vidhana Soudha, Bangalore on or before 17.02.2011, failing which you will be punishable with imprisonment for a term which may extend to one year or with fine or with both.

**K.C. SIDDAPPA**

Under Secretary to Government,

PR-38

Home Department (Law & Order, COFEPOSA & Prosecution)

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 55:RTI:2009(1), Bangalore, Dated:12th January, 2011**

In exercise of the powers conferred on me by sub-section (3) of section 15 of the Right to Information Act, 2005 (Central Act No.22 of 2005) I H.R. Bhardwaj, Governor of Karnataka, do hereby appoint Shri A.K.M. Nayak, Rtd Additional Chief Secretary and former Chairman Karnataka Urban Infrastructure Development and Finance Corporation, Bangalore as the State Chief Information Commissioner in the Karnataka Information Commission.

The term of office of the Commissioner shall be five years from the date on which he assumes his office or until he attains the age of 65 years which ever is earlier as provided under section 16(1) of the Act.

**H.R. Bhardwaj**

Governor of Karnataka

By Order and in the name of Governor of Karnataka,

**L. VENKATAGIRIYAPPA**

PR-39

Under Secretary to Government,
Department of Personnel and Administrative Reforms
(Janaspandana Cell-RTI).

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 55:RTI:2009(2), Bangalore, Dated:12th January, 2011**

In exercise of the powers conferred on me by sub-section (3) of section 15 of the Right to Information Act, 2005 (Central Act No.22 of 2005) I H.R. Bhardwaj, Governor of Karnataka, do hereby appoint following persons as State Information Commissioners in the Karnataka Information Commission.

1) Shri D. Thangaraj,
Rtd. Principal secretary to Government.
2) Shri M.R. Pujar
Rtd. IGP & Additional Commissioner of Police
3) Shri T. Rama Naik
Advocate, Shikaripura,
4) Dr. Shekhar D. Sajjanar
Surgeon by profession & Social Worker, Gadag.

The term of office of the Commissioner shall be five years from the date on which they assume their office or until they attain the age of 65 years whichever is earlier as provided under section 16(1) of the Act.

**H.R. Bhardwaj**
Governor of Karnataka
By Order and in the name of Governor of Karnataka,
**L. VENKATAGIRIYAPPA**
Under Secretary to Government,
Department of Personnel and Administrative Reforms
(Janaspandana Cell-RTI).

PR-40

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 127 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ:14ನೇ ಜನವರಿ, 2011**

ಅಡ್ಮಿನಿಸ್ಟ್ರೇಟರ್ ಜನರಲ್ ಅಧಿನಿಯಮ 1963 (ಕೇಂದ್ರದ 1963ರ 45ನೇ ಅಧಿನಿಯಮ) 3ನೇ ಕಲಂ (1) ಉಪ ಕಲಂ ಪ್ರಕಾರ ಮತ್ತು ಅಫಿಷಿಯಲ್ ಟ್ರಸ್ಟೀಸ್ ಅಧಿನಿಯಮ 1913ರ (ಕೇಂದ್ರದ 1913ರ 11ನೇ ಅಧಿನಿಯಮ) 4ನೇ ಕಲಂ (1)ನೇ ಉಪಕಲಂ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಬಳಸಿ ಕರ್ನಾಟಕ ರಾಜ್ಯ ಸರ್ಕಾರವು ಶ್ರೀಮತಿ ಪದ್ಮಾವತಿ ಎಸ್. ಸವಣೂರ್, ನಂ.17, ಮೊದಲನೇ ಹಂತ, ಎಂ.ಐ.ಜಿ. ಹೌಸ್, ಕೆ.ಎಚ್‌ಬಿ ಕಾಲೋನಿ, ಮಾಗಡಿ ರೋಡ್, ಬೆಂಗಳೂರು–560077 ಇವರನ್ನು ಕರ್ನಾಟಕ ರಾಜ್ಯಕ್ಕೆ ಅಡ್ಮಿನಿಸ್ಟ್ರೇಟರ್ ಜನರಲ್ ಹಾಗೂ ಅಫಿಷಿಯಲ್ ಟ್ರಸ್ಟಿಯಾಗಿ ಈ ಅಧಿಸೂಚನೆಯು ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾ. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್.41

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 105 ಸಿಎನ್‌ಎಸ್ 2010, ಬೆಂಗಳೂರು, ದಿನಾಂಕ:14ನೇ ಜನವರಿ, 2011**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಕಾನಹೊಸಹಳ್ಳಿ ಶ್ರೀ ಗಜಾನನ ರೇಷ್ಮೆ ಕೈಮಗ್ಗದ ನೇಕಾರರ ಉತ್ಪತ್ತಿ ಮತ್ತು ಮಾರಾಟ ಸಹಕಾರ ಸಂಘ ನಿ., ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

1) ಶ್ರೀ ಟಿ.ಎನ್. ಬಸಣ್ಣ ತಂದೆ ರುದ್ರಪ್ಪ, ಖಾನಾಹೊಸಹಳ್ಳಿ, ಕೂಡ್ಲಿಗಿ ತಾಲ್ಲೂಕು.
2) ಶ್ರೀಮತಿ ಶಾರದ ಕೋಂ ಹಂಪಣ್ಣ, ಖಾನಾಹೊಸಹಳ್ಳಿ, ಕೂಡ್ಲಿಗಿ ತಾಲ್ಲೂಕು.
3) ಶ್ರೀ ಗಂಗಣ್ಣ ತಂದೆ ಗಂಗಪ್ಪ, ಖಾನಾಹೊಸಹಳ್ಳಿ, ಕೂಡ್ಲಿಗಿ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್.42